ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 19 ನೇ ಮಾರ್ಚ್, 2020

KPSC- GP ಹುದ್ದೆಗಳ ನೇಮಕಾತಿಯ ಗೊಂದಲಗಳ ಬಗ್ಗೆ

ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

1246 (1560) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) KPSP 2011 ರ ರದ್ದಾದ 362 ಕೆ.ಎ.ಎಸ್. ಗೆಜೆಟೆಡ್ ಪ್ರೊಬೆಷನರಿ ಹುದ್ದೆಗಳಿಗೆ ಹೊಸ ನೇಮಕಾತಿ ಅಧಿಸೂಚನೆ ಹೊರಡಿಸುವುದು ಯಾವಾಗ;

(ಆ) 2011ನೇ ಸಾಲಿನ ನೇಮಕಾತಿ ಗೊಂದಲ ಇತ್ಯಾರ್ಥವಾಗದೆ ಸರ್ಕಾರ ಹೊಸದಾಗಿ 2017-18ನೇ ಸಾಲಿನ KAS-GP 106 ಹುದ್ದೆಗಳಿಗೆ ಆತುರವಾಗಿ ಅಧಿಸೂಚನೆ ಹೊರಡಿಸಲು ಕಾರಣವೇನು;

(ಇ) 2011ರಲ್ಲಿ ಅರ್ಜಿ ಸಲ್ಲಿಸಿದ್ದು ಪ್ರಸ್ತುತ ವಯೋಮಿತಿ ಮೀರಿದ ಅಭ್ಯರ್ಥಿಗಳು ಈ ಹೊಸ ನೇಮಕಾತಿಗೆ ಅರ್ಜಿ ಸಲ್ಲಿಸಬಹುದೇ; (ವಿವರ ನೀಡುವುದು)

(ಈ) ಪ್ರಸ್ತುತ ರಾಜ್ಯದಲ್ಲಿ ಖಾಲಿ ಇರುವ ಹುದ್ದೆ AC, DYSP ತಹಶೀಲ್ದಾರ್ ಸೇರಿದಂತೆ (2017-18ನೇ ಸಾಲಿನ KAS-GP ಹುದ್ದೆಗಳನ್ನು ಹೊರುತುಪಡಿಸಿ); ಒಟ್ಟು ಖಾಲಿ ಇರುವ ಕೆ.ಎ.ಎಸ್ ಗೆಜೆಟೆಡ್ ಪ್ರೊಬೆಷನರಿ (ಗ್ರೂಪ್-'ಎ' ಮತ್ತು ಗ್ರೂಪ್-'ಬಿ') ಹುದ್ದೆಗಳು ಎಷ್ಟು; ಹುದ್ದೆಗಳಿಗೆ ಅನುಸಾರವಾಗಿ ವಿವರ ನೀಡುವುದು;

(ಉ) PC ಹೋಟಾ ಸಮಿತಿಯ ಶಿಫಾರಸ್ಸಿಗೆ ಅನುಗುಣವಾಗಿ UPSC (ಕೇಂದ್ರ ಲೋಕ ಸೇವಾ ಆಯೋಗ) ಯಂತೆ KPSC ಯೂ ಸ್ಪರ್ಧಾತ್ಮಕ ಪರೀಕ್ಷೆಯನ್ನು ಬರೆಯುವ ಅಭ್ಯರ್ಥಿಗಳಿಗೆ ಅನುಕೂಲವಾಗಲೆಂದು ಪ್ರತಿ ವರ್ಷದ ನೇಮಕಾತಿಯ ಕ್ಯಾಲೆಂಡರನ್ನು ಬಿಡುಗಡೆ ಮಾಡುತ್ತಿದ್ದು ಕಳೆದ ನಾಲ್ಕು ವರ್ಷಗಳಿಂದ

KPSC ಯೂ ನೇಮಕಾತಿ ಕ್ಯಾಲೆಂಡರನ್ನು ಬಿಡುಗಡೆ ಮಾಡದೇ ಇರಲು ಕಾರಣವೇನು ? (ವಿವರ ನೀಡುವುದು)